ಒಂದಾಣೆ ಮಾಲೆ 272

# ಚಂಡಿ

(ಪೌರಾಣಿಕ ಏಕಾಂಕ)

 

ರಚಯಿತ:

ಯಂ. ಕೆ. ಬೇಲಕರ.

 

1960

ಬೆಲೆ: ೧ ಆಣೆ.

ಒಂದಾಣೆ ಮಾಲೆ — ಮಂಗಳೂರು.

[ಹೊದಿಕೆಯ 3ನೇ ಪುಟದಿಂದ ಮುಂದುವರಿದುದು]

ದುರಾತ್ಮಳೇ, ನೀನು ಇಲ್ಲಿಯೇ ನಿಂತಲ್ಲಿಯೇ ಅರೆಯಾಗಿ ಬೀಳು (ಶಾಪ). (ಚಂಡಿಯು ಅರೆಯಾಗಿ ಬೀಳುವಳು).

ಬ್ರಾಹ್ಮಣ ೧: ಇದೇನು ಮಾಡಿದೆ ಉದ್ದಾಲಕ? ವೇದಶಾಸ್ತ್ರ ಪಾರಂಗತನೂ, ಸಕಲವಿದ್ಯಾಕೋವಿದನೂ ಆದ ನೀನು ಈ ರೀತಿ ಅಬಲೆಯನ್ನು ಶಿಕ್ಷಿಸಬಹುದೇ?

ಉದ್ದಾಲಕ: ವಿಪ್ರಶ್ರೇಷ್ಠರೇ, ಅವಳ ಚಂಡಿತನವು ಮಿತಿಮೀರಿತು. ನನ್ನ ಪಿತೃಶ್ರಾದ್ಧವು ಕೆಟ್ಟುಹೋಯಿತು. ಸಿಟ್ಟಿನಿಂದ ಶಾಪವಿತ್ತೆನು. ಅರಿಯದೇ ಮಾಡಿದ ತಪ್ಪನ್ನು ಕ್ಷಮಿಸಿರಿ!

ಬ್ರಾಹ್ಮಣ ೨: ಮರುಶಾಪವನ್ನಾದರೂ ನೀಡಿ ಅವಳನ್ನು ಬದುಕಿಸು, ಉದ್ದಾಲಕ!

ಉದ್ದಾಲಕ: (ಆಲೋಚಿಸಿ) ಸರಿ ಸರಿ! ಹಿಂದೆ ಹರಿಯು ಮೆಟ್ಟಿದಾಗ ಕಲ್ಲಾದ ಅಹಲ್ಯೆಯು ಪೂರ್ವರೂಪವನ್ನು ಹೊಂದಿದಂತೆ, ಚಂಡಿಯೇ! ಧರ್ಮಜನ ಯಾಗದ ಹರಿಯು ನಿನ್ನನ್ನು ಮೆಟ್ಟಿ ಅರ್ಜುನನಿಂದ ಬಿಡಿಸಲ್ಪಟ್ಟಾಗ ನೀನು ಪುನಃ ಸ್ತ್ರೀ ರೂಪವನ್ನು ಹೊಂದುವೆ.

ಬ್ರಾಹ್ಮಣ ೧: ಆಗಲಿ; ಅಷ್ಟಾದರೂ ಆಯಿತಲ್ಲವೆ? ಉದ್ದಾಲಕನೇ, ಹೋಗಿಬರುವೆನು.

ಉದ್ದಾಲಕ: ಪೂಜ್ಯರೇ, ನನಗೆ ಈ ಸಂಸಾರಸುಖವು ಬೇಡ. ಅದರಲ್ಲಿ ಸ್ತ್ರೀಸಹವಾಸವು ಬಹಳ ಕಷ್ಟವೆಂದೇ ತೋರುತ್ತಿರುವುದು. ಆದುದರಿಂದ ನಾನಿನ್ನು ಇಂದಿನಿಂದಲೇ ಸನ್ಯಾಸದೀಕ್ಷೆಯನ್ನು ವಹಿಸಿ, ನಿತ್ಯವೂ ಅಚಿಂತ್ಯನಾದ ಪರಮಾತ್ಮನ ಧ್ಯಾನದಲ್ಲಿ ನನ್ನ ಉಳಿದ ಆಯುಷ್ಯನ್ನು ದೂಡುತ್ತಾ ಇರುವೆನು. ಅದಕ್ಕೆ ಅನುಮತಿಯನ್ನು ಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

ಬ್ರಾಹ್ಮಣರಿಬ್ಬರು: ಆಗಲಿ, ನಿನ್ನ ಇಷ್ಟವು ಯಾವುದೊಂದೂ ಎಡೆತಡೆಗಳಿಲ್ಲದೆ ಸಾಗಲಿ!

ಉದ್ದಾಲಕ: ಪೂಜ್ಯರೇ, ಜಗದ ಸಂಸಾರಬಂಧನದಿಂದ ಮುಕ್ತನಾಗಿ ಧನ್ಯನಾದೆನು.

ಓಂ ಶಾಂತಿ ಶಾಂತಿ.

— ಸಂಪೂರ್ಣ —

# ಚಂಡಿ

## (ಪೌರಾಣಿಕ ಏಕಾಂಕ)

.........

### ಪಾತ್ರಪರಿಚಯ:—

ಉದ್ದಾಲಕ—ವಿಂಧ್ಯಾಟವಿಯಲ್ಲಿರುವ ಓರ್ವ ಬ್ರಾಹ್ಮಣ.
ಚಂಡಿ—ಉದ್ದಾಲಕನ ಹೆಂಡತಿ.
ಕೌಂಡಿನ್ಯ—ಮುನಿ.
ಇಬ್ಬರು ಬ್ರಾಹ್ಮಣರು.

### ದೃಶ್ಯ ೧

(ಉದ್ದಾಲಕನ ಮನೆ. ಮನೆಯೊಳಗೆ ಒಂದೆರಡು ಕಲ್ಲಿನ ಆಸನಗಳು— ಉದ್ದಾಲಕನು ಓಲೆಗ್ರಂಥವನ್ನು ಹಿಡಿದು ಆಸನ ಒಂದರಲ್ಲಿ ಕುಳಿತಿರುವನು.)

ಉದ್ದಾಲಕ: ಚಂಡೀ, ಚಂಡಿಕಾ, ಲೇ ಚಂಡಿಕಾ........

ಚಂಡಿ: (ಪ್ರವೇಶಿಸಿ) ಚಂಡಿಯೋ ಗಿಂಡಿಯೋ........ಏಕೇಂದರೇ?

ಉದ್ದಾಲಕ: ಏನು ಚಂಡೀ! ಪ್ರತಿದಿನವೂ ನಿನ್ನ ಆಟ ಒಂದೇ. ಹೇಳಿದುದಕ್ಕೆಲ್ಲಾ ವಿರೋಧವನ್ನೇ ಮಾಡುತ್ತಿರುವೆಯಲ್ಲಾ! ನೋಡು, ಆ ದನವನ್ನು ಗೋದಲಿಯಲ್ಲಿ ಕಟ್ಟೆಂದರೆ ಮನೆಯಲ್ಲಿ ತಂದು ಕಟ್ಟಿದೆಯಲ್ಲ! ನಮ್ಮ ಮನೆ ಬಹಳ ಹೆಸರುಪಡೆದುದು ನೋಡು. ಯಾರಾದರೂ ಯತಿಗಳು ಬಂದರೆ ನಿನ್ನ ಈ ಚಂಡಿತನವನ್ನು ನೋಡಿ ಏನೆಂದುಕೊಂಡಾರು?

ಚಂಡಿ: ಅವರು ಏನು ಬೇಕಾದರೂ ಅಂದುಕೊಳ್ಳಲಿ. ನನ್ನ ಮನಸ್ಸಿಗೆ ಸರೀ ಎಂದುದನ್ನು ನಾನು ಮಾಡುತ್ತೇನೆ.

ಉದ್ದಾಲಕ: ಬ್ರಾಹ್ಮಣಕುಲದಲ್ಲಿ ಹುಟ್ಟಿದ ನಾವು ಬ್ರಾಹ್ಮಣರೆಲ್ಲರೂ ಆಚರಿಸುವಂತೆಯೇ ಹೋಮ ಜಪ ತಪ ಮಾಡಬೇಡವೇ? ಆದಕಾರಣ ನೀನು ನನಗೆ ಕಾಲಕಾಲಕ್ಕೆ ತಕ್ಕಂತೆ ಸನ್ನಾಹಗಳನ್ನು ಒದಗಿಸುತ್ತಿರಬೇಕಲ್ಲವೇ?

ಚಂಡಿ: ನಾನು ನಿಮಗೆ ಸನ್ನಾಹಗಳನ್ನು ಒದಗಿಸುತ್ತಿರಬೇಕೆಂದಿರಾ? ಇಲ್ಲ. ಖಂಡಿತವಾಗಿಯೂ ಇಲ್ಲ. ಸಾಧ್ಯವೇ ಇಲ್ಲ. ಬೇಕಾದರೆ ನೀವೇ ಒದಗಿಸಿಕೊಳ್ಳಿರಿ.

ಉದ್ದಾಲಕ: ಚಂಡಿ! ಇದೇನು ಹೀಗೆ ಹೇಳುತ್ತಿರುವೆ? ನೀನಲ್ಲವೇ ನನ್ನ ಭಾಗ್ಯದೇವತೆ! ಅರ್ಧಾಂಗಿ, ನೀನು ನನ್ನ ಕಾರ್ಯಗಳಲ್ಲಿ ಸಹಕರಿಸುತ್ತಿರಬೇಡವೇ? ಅಲ್ಲದೆ ನಮ್ಮ ಮನೆಯಲ್ಲಿ ಬಹಳ ಹಿಂದಿನಿಂದಲೂ ನಡೆದು ಬರುತ್ತಿರುವ ಪೂಜೆ ಪುರಸ್ಕಾರಗಳನೇಕವಿವೆ. ಅವುಗಳನ್ನು ಒಂದಿಷ್ಟಾದರೂ ಲೋಕಾಚಾರದಂತೆ ನಡೆಸಿಕೊಂಡು ಹೋಗುವುದು ನಮ್ಮ ಕರ್ತವ್ಯವಲ್ಲವೇ?

ಚಂಡಿ: ಅಲ್ಲಸಲ್ಲದ ಮಾತುಗಳನ್ನು ನನ್ನೊಡನೇತಕ್ಕೆ ಹೇಳಬೇಕು? ಆ ಕೆಲಸಗಳು ನನ್ನಿಂದಾಗದೇ ಆಗವು. ನಾನು ಮಾಡಲಾರೆ.

ಉದ್ದಾಲಕ: ಚಂಡೀ, ಹಾಗೆನ್ನಲಾಗದು! ನಾನು ಗಳಿಸಿದ ಪುಣ್ಯವಿದ್ದರೆ ಅದು ನಮ್ಮದೇ ಅಲ್ಲವೇ? ನೀನೂ ನಿನ್ನ ಸನ್ನಡತೆಯಿಂದ ಗಳಿಸಿದ ಪುಣ್ಯವಿದ್ದರೆ ಅದು ನಮ್ಮದೇ ಅಲ್ಲವೇ? ಹಾಗಿರುವಲ್ಲಿ ನಮಿಬ್ಬರ ಜೀವನವು ಸಮರಸದಿಂದ ಬೆರೆತು ಸಾಗಿದರೆ ಲೋಕಕ್ಕೇ ಆದರ್ಶಪ್ರಾಯರಾಗಿ ಮೆರೆಯಬಹುದಲ್ಲವೇ?

ಚಂಡಿ: ಆಹಾಹಾ! ನಿಮ್ಮ ಉಪದೇಶಗಳಿಗೆಲ್ಲಾ ಬಲಿಯಾಗುವವಳು ನಾನಲ್ಲ. ಹಾಗೆ ಮಾಡು, ಹೀಗೆ ಮಾಡು ಎಂದು ನನಗೇಕೆ ಧರ್ಮೋಪದೇಶ ಕೊಡಬೇಕು? ನಾನು ನಿಮ್ಮ ಮಾತನ್ನು ಖಂಡಿತ ಕೇಳುವವಳಲ್ಲ. ಆ ರೀತಿಯಲ್ಲಿ ನಡೆಯುವುದಕ್ಕೆ ನನ್ನಿಂದಾಗದು.

ಉದ್ದಾಲಕ: (ಆಲೋಚಿಸಿ) ಚಂಡೀ, ನಿನಗೆ ತಿಳಿವಿಲ್ಲ. ನಾವು ಕಾಲಕಾಲಕ್ಕೆ ತಕ್ಕಂತೆ ನಮ್ಮ ಜಾತಿಧರ್ಮಕ್ಕೆ ಅನುಸಾರವಾಗಿ ಆಚರಿಸಬೇಕಾದ ಆಚರಣೆಗಳನ್ನು ಆಚರಿಸದಿದ್ದಲ್ಲಿ ನಾವು ಪಾಪಿಷ್ಠರಾಗುತ್ತೇವೆ. ಪಾಪಿಷ್ಠರಿಗೆ ದೇವರು ನೆರವು ನೀಡುವನೇ? ಆದುದರಿಂದ ಪ್ರೀಯಳೇ, ನೀನು ಇನ್ನಾದರೂ ಆಲಸ್ಯದಿಂದ, ಜಡಮತಿಯಂತೆ ವರ್ತಿಸಬಾರದು. ನಿನ್ನದೇ ಮನೆಯಲ್ಲವೇ? ಉತ್ತಮ ಆಚರಣೆಗಳಿಂದ ಅದು ಉನ್ನತ ಕೀರ್ತಿಯನ್ನು ಗಳಿಸಿ ಮೆರೆವುದನ್ನು ನೀನೇ ನೋಡುವವಳಲ್ಲವೇ?

ಚಂಡಿ: ಯಾರ ಗೊಡವೆಯೂ ಸಹಾಯವೂ ನನಗೆ ಬೇಡ. ನನಗೆ ನೀವು ಹೇಳಿದ ಹಾಗೆ ನಿಮ್ಮ ಚಾಕರಿಮಾಡಲು ಸಾಧ್ಯವೇ ಇಲ್ಲ.

ಉದ್ದಾಲಕ: (ಚಿಂತಿಸಿ—ಸ್ವಗತ) ಇದೇನು ದುರ್ಭಾಗ್ಯ ನನ್ನದು? ಇವಳು ಏನೆಂದರೂ ಕೇಳುವುದಿಲ್ಲವಲ್ಲಾ? ಸಕಲ ವೇದಶಾಸ್ತ್ರಪಾರಂಗತನಾಗಿಯೂ ನಾನು ಮಡುವಿನಲ್ಲಿ ಬಿದ್ದೆನಲ್ಲಾ! (ಚಂಡಿಗೆ) ಚಂಡಿಯೇ! ಪುನಃ ಕೇಳುತಿದ್ದೇನೆ— ನೀನೇ ನನಗೆ ಈ ರೀತಿ ಪ್ರತಿಕೂಲೆಯಾಗಿದ್ದು ನಮ್ಮ ವಂಶದ ಕೀರ್ತಿಗೆ ಮಸಿಯಿಂದ ಬರೆ ಬಳಿಯುತ್ತಿರುವೆಯಾ?

ಚಂಡಿ: ನಾನು ನನ್ನ ಇಚ್ಛಾನುಸಾರವಲ್ಲದೆ ನಿಮ್ಮ ಮಾತಿನಂತೆ ಖಂಡಿತವಾಗಿ ನಡೆಯಲಾರೆ. ನನಗೆ ನಿಮ್ಮ ಜಪಾ ತಪಃ ಪೂಜೆಪುರಸ್ಕಾರಗಳ ಗೊಡವೆಯೇ ಇಲ್ಲ. ನೀವು ಏನು ಬೇಕೋ ಅದನ್ನು ಮಾಡಿಕೊಳ್ಳಿರಿ.

ಉದ್ದಾಲಕ: (ಚಿಂತೆಯಿಂದ) ಚಂಡೀ, ವಿನೋದ ಸಾಕು. ನನ್ನ ಕೈಹಿಡಿದ ಧರ್ಮಪತ್ನಿ ನೀನು! ನನಗೆ ಅನುಕೂಲೆಯಾಗಿರತಕ್ಕವಳು. ಮನೆವಾರ್ತೆಯಲ್ಲಿ ಒಂದಿಷ್ಟಾದರೂ ಗಮನವಿರಿಸದೆ ನನಗೇ ಪ್ರತಿಕೂಲೆಯಾಗಿರಲು ನಿನಗೆ ಸಾಧ್ಯವೇ ಇಲ್ಲ.

ಚಂಡಿ: ಮನೆವಾರ್ತೆಯೋ ಪರಿಚಾರಿಕೆಯೋ? ಅದೊಂದೂ ನನಗರಿಯದು—ನಾನು ಆ ಗೊಡವೆಯಲ್ಲಿರತಕ್ಕವಳೇ ಅಲ್ಲ.

ಉದ್ದಾಲಕ: (ದುಃಖದಿಂದ–ಸ್ವಗತ) ಅಯ್ಯೋ! ಪಾಷಾಣಹೃದಯಿ ಚಂಡಿಯನ್ನು ಕಟ್ಟಿಕೊಂಡು ಹೇಗೆ ಸಂಸಾರ ಸಾಗಿಸಲಿ! ನಾನು ಇದುತನಕ ಆಚರಿಸುತ್ತಿದ್ದ ತಪಸ್ಸು ಪೂಜೆ ಪುರಸ್ಕಾರಗಳು ನಾಶವಾಗುವ ಕಾಲ ಸನ್ನಿಹಿತವಾಯಿತಲ್ಲಾ! (ಚಂಡಿಗೆ) ನನ್ನ ಮಮತೆಯ ಚಂಡಿಯೇ, ಸಂಜೆಗೆ ಊಟವನ್ನಾದರೂ ತಯಾರಿಸುವೆಯಾ? ಪೂಜಾಸನ್ನಾಹಗಳನ್ನು ನಾನೇ ಮಾಡಿಕೊಳ್ಳುವೆನು.

ಚಂಡಿ: ಈ ದಿನ ಫಲಾಹಾರವನ್ನೇ ಮಾಡುವೆನು; ಊಟಕ್ಕೆ ಸನ್ನಾಹಮಾಡುವುದೇ ಇಲ್ಲ. (ಚಂಡಿ ಹೋಗುವಳು)

ಉದ್ದಾಲಕ: ಜಗದುದ್ಧಾರಕನಾದ ಪರಮಾತ್ಮನೇ, ಅಚಿಂತ್ಯನಾದ ನೀನು ಇಂತಹ ಕಷ್ಟವನ್ನು ನೀಡಿದೆಯಾ? ಈ ಚಂಡಿಯನ್ನು ಮದುವೆಯಾಗಿ 'ಮುಳ್ಳಿಡಿದ ಮರವೇರಿ'ದಂತಾದೆನಲ್ಲಾ! ಅಯ್ಯೋ ದುರ್ವಿಧಿಯೇ! ನನ್ನ ಧರ್ಮಕ್ಕೇ ಧಕ್ಕೆಬರುವ ಕಾಲ ಬಂತಲ್ಲ! ನಾನು ಏತಕ್ಕೆ ಇವಳ ಕೈಹಿಡಿದೆನೋ? ಮತ್ತೇಕೆ ಇವಳು ನನಗೆ ಸಿಕ್ಕಿದಳೋ? ಒಂದೂ

ಅರಿಯದಾದೆನಲ್ಲಾ! ಅಳ್ಳಿಯಲ್ಲಿ ಕೋಲಗ್ಗೊಂಡವನ ಸ್ಥಿತಿಗಿಂತಲೂ ಕಠಿಣವಾಯಿತಲ್ಲಾ—ನನ್ನ ಜೀವನ! ಚಂಡಿಯು ಕೈಹಿಡಿದಂದಿನಿಂದ ಕೇವಲ ದುಃಖಜಲಬಿಂದುಗಳೇ ನನ್ನ ಹೃದಯವನ್ನು ತುಂಬುತ್ತಿವೆ! ಹೇ! ಜಗದುದ್ಧಾರಕನೇ! ಇದನ್ನು ನೋಡಿ ನಿನಗೆ ಕನಿಕರವುಂಟಾಗುವುದಿಲ್ಲವೇ! ಬದುಕಿದ್ದಲ್ಲಿಗೇ ಇದೆಂತಹ ನರಕಯಾತನೆಯನ್ನು ನನಗೆ ನೀಡುತ್ತಿರುವೆ? ಹೇ ದಯಾನಿಧಿಯೇ! ನನಗೆ ಈ ಬಂಧವಿಮೋಚನೆ ಎಂದಿಗೆ ಆಗುವುದೋ? ಈ ಚಂಡಿಯ ದುಷ್ಟಛಲದಿಂದಾಗಿ ಮುಳ್ಳಿನ ಹಾಸುಗೆಯಲ್ಲಿ ಮಲಗಿರುವ ನನ್ನ ಅಘವಿಮೋಚನೆಗೈದು ನಿತ್ಯಶಾಂತಿ ಕರುಣಿಸಲಾರೆಯಾ? ಇದೋ, ನಿನಗೆ ನನ್ನ ಅನಂತಪ್ರಣಾಮಗಳು. ತೆರೆ.

## ದೃಶ್ಯ ೨

[ಉದ್ದಾಲಕನ ಮನೆ—ಒಂದು ಆಸನದಲ್ಲಿ ಉದ್ದಾಲಕನು ಚಿಂತಿಸುತ್ತಾ ಕುಳಿತಿರುವನು.]

ಉದ್ದಾಲಕ: ದಿನದಿನವೂ ಇದೊಂದೇ ವೇದನೆಯು ನನ್ನನ್ನು ಮುತ್ತುತ್ತಿದೆಯಲ್ಲ! ಈ ಚಂಡಿಯನ್ನು ನಾನೇತಕ್ಕೆ ಮದುವೆಯಾದೆ? ಇವಳ ದೆಸೆಯಿಂದ ಇಹದಲ್ಲಿ ಸುಖವಿಲ್ಲ. ನನ್ನ ಹಿರಿಯರು ಉತ್ತಮರಾಗಿ ಪರದಲ್ಲಿ ಸದ್ಗತಿಯನ್ನು ಹೊಂದಿದರು. ನನಗೆ ಆ ಸದ್ಗತಿ ಎಲ್ಲಿ ಮಾಯವಾಗುವುದೋ ಎಂದು ಭಯವೂ ಆಗುವುದು.... ನನಗೆ ತಪೋನಿಯಮಗಳ ಭಂಗದಿಂದ ಪಾಪವು ಒದಗುವಂತಾಯಿತಲ್ಲಾ!

[ಕೌಂಡಿನ್ಯ ಮುನಿಯು ಅಲ್ಲಿಗೆ ಆಗಮಿಸುವನು. ಉದ್ದಾಲಕನು ಪೀಠದಿಂದೆದ್ದು]

ಉದ್ದಾಲಕ: (ಆತ್ಮಗತ) ಇವರನ್ನು ನೋಡಿದಾಗ ಮಹಾಯೋಗಿಗಳಂತೆ ತೋರುತ್ತಿರುವುದು. (ಪ್ರಕಾಶವಾಗಿ) ಪೂಜ್ಯರಿಗೆ ವಂದಿಸುವೆನು. (ಎದುರಲ್ಲಿ ಹುಲ್ಲುಚಾಪೆಯನ್ನು ಹಾಸಿದ ಕಲ್ಲಿನ ಪೀಠವನ್ನು ತೋರಿಸಿ) ಈ ಪೀಠವನ್ನು ಅಲಂಕರಿಸಬೇಕು.

ಕೌಂಡಿನ್ಯ: ಬ್ರಾಹ್ಮಣಶ್ರೇಷ್ಠನೇ! ನಿನಗೆ ಶ್ರೇಯಸ್ಸುಂಟಾಗಲಿ! ಉತ್ತರೋತ್ತರ ಕೀರ್ತಿಯುಂಟಾಗಲಿ!

ಉದ್ದಾಲಕ: ಪೂಜ್ಯರೇ, ತಮ್ಮ ಹೆಸರೇನು? ತಮ್ಮ ದೇಶವಾವುದು? ಆವ ನಿಮಿತ್ತದಿಂದ ಈ ಬಡವನ ಕುಟೀರಕ್ಕೆ ತಮ್ಮ ಆಗಮನವಾಯಿತು?

ಕೌಂಡಿನ್ಯ: ನನ್ನ ಹೆಸರು ಕೌಂಡಿನ್ಯನೆಂದು. ನನ್ನ ದೇಶವೆಂದರೇನು? ದೇಶ ದೇಶಗಳಲ್ಲಿ ಸಂಚರಿಸುತ್ತಾ ಜಗದ ಸಂಸಾರ ಪಾವನವಮಾಡುತ್ತಾ, ಭಿಕ್ಷಾನ್ನದಿಂದ ಜೀವಿಸುತ್ತ, ಅಚಿಂತ್ಯನೂ ಅಮರನೂ ಆದ ಭಗವಂತನ ಧ್ಯಾನದಲ್ಲಿ ಕಾಲಕಳೆಯುವುದೇ ನನ್ನ ಧರ್ಮ. ಹಾಗಿರಲು, ಈ ವಿಂಧ್ಯಾಟವಿಯ ದಾರಿಯಲ್ಲಿ ಬರುತ್ತಿದ್ದಾಗ, ಸಕಲ ವೇದಶಾಸ್ತ್ರ ಪುರಾಣೇತಿಹಾಸಗಳನ್ನು ಬಲ್ಲ ಉದ್ದಾಲಕನೆಂಬ ವಿದ್ವಾಂಸನಿರುವನೆಂದು ಕೇಳಿದೆನು. ಆದುದರಿಂದ ತೀರ್ಥಯಾತ್ರೆಗೆ ಹೋಗುವ ನಾನು ನಿನ್ನನ್ನು ನೋಡಿ ಹೋಗೋಣವೆಂದು ಇಲ್ಲಿಗೆ ಬಂದಿರುತ್ತೇನೆ.

ಉದ್ದಾಲಕ: (ಮನಸ್ಸಿನಲ್ಲಿರುವ ದುಃಖವನ್ನು ಮರೆಮಾಚಿ) ಬಹಳ ಸಂತೋಷವಾಯಿತು! ತಮ್ಮಂತಹ ಮಹಾಜ್ಞಾನಿಗಳ ಪಾದಸ್ಪರ್ಶದಿಂದ ನನ್ನ ಕುಟೀರವು ಪಾವನವಾಯಿತು. ನಮ್ಮ ಹಿರಿಯರು ಪೂಜೆಪುರಸ್ಕಾರಗಳಿಂದ ಪರದಲ್ಲಿ ಸದ್ಗತಿಯನ್ನು ಹೊಂದಿದರು. ಅದನ್ನೇ ಹೊಂದಲೆಂದು ನಾನು ನಿರಂತರವೂ ದೈವಚಿಂತನೆಯಲ್ಲಿ ಕಾಲಕಳೆಯುತ್ತಿರುವೆನು.

ಕೌಂಡಿನ್ಯ: ಸಂತೋಷ. ಉದ್ದಾಲಕನೇ, ಅದೇನೋ ಒಂದು ಚಿಂತೆ ನಿನ್ನ ಹೃದಯದಲ್ಲಿ ಸುಪ್ತವಾಗಿರುವಂತೆ ಭಾಸವಾಗುತ್ತಿದೆ. ಅದನ್ನು ನನ್ನೊಡನೆ ಹೇಳಬಹುದೆಂದಾದರೆ, ಕೇಳುವ ಕುತೂಹಲದಿಂದಿರುವೆನು.

ಉದ್ದಾಲಕ: ತಾವು ಸರ್ವಜ್ಞರು. ಅಲ್ಲದೆ ಮಹಾಜ್ಞಾನಿಗಳು. ಎಷ್ಟು ಶಾಸ್ತ್ರಗಳನ್ನು ಓದಿದರೇನು? ಸಂಸಾರದಲ್ಲಿ ಸಂತೋಷದ ವಾತಾವರಣವನ್ನು ಕಲ್ಪಿಸುವುದರಲ್ಲಿ ನಾನು ಹಿಂದಿದ್ದೇನೆ.

ಕೌಂಡಿನ್ಯ: ಏನಾದರೂ ಕ್ರೂರ ರಕ್ಕಸರ ಬಾಧೆ ಇದೆಯೋ?

ಉದ್ದಾಲಕ: ಅಂತಹುದೇನೂ ದೇವರ ದಯದಿಂದ ಇದು ತನಕ ಬಂದಿಲ್ಲ. ಆದರೆ, ಪೂಜ್ಯರೇ, ನನ್ನದು ಕಠಿಣವಾದ ಸಮಸ್ಯೆ. ಕೇಳುವವರಿಗೆ ಅದರ ಪೂರ್ಣ ರೂಪ ತಿಳಿಯದು. ಅನುಭವಿಸುವವರಿಗೇ ಚೆನ್ನಾಗಿ ಗೊತ್ತು.

ಕೌಂಡಿನ್ಯ: ಕಠಿಣವೇ? ಅದೇನ ?

ಉದ್ದಾಲಕ: ನಾನು ಮದುವೆಯಾದಂದಿನಿಂದ ಕೇವಲ ದುಃಖದಿಂದಲೇ ಕಾಲ ಕಳೆಯುತ್ತಿದ್ದೇನೆ. ಉತ್ತಮಳೆಂದೂ, ಸಚ್ಛೀಲಳೆಂದೂ ಗ್ರಹಿಸಿ ಚಂಡಿಯೆಂಬ ಕನ್ನಿಕೆಯನ್ನು ಮೆಚ್ಚಿ ಕೈಹಿಡಿದೆನು. ಮದುವೆಯಾದನಂತರ

ಅವಳ ಸ್ವಭಾವವು ನನಗೆ ಚೆನ್ನಾಗಿ ಅನುಭವವಾಯಿತು. ನಾನು ಹೇಳಿದ್ದಕ್ಕೆ ತೀರಾ ವ್ಯತಿರಿಕ್ತವಾಗಿಯೇ ಅವಳ ಆಚರಣೆ! ಇದರಿಂದಾಗಿ ದಿನೇ ದಿನೇ ನನ್ನ ಚಿಂತೆಯು ಹೆಚ್ಚುತ್ತಿದೆ.

ಕೌಂಡಿನ್ಯ: ಆಹಾ! ಇಷ್ಟೇ ತಾನೆ? ಇದು ಸಮಸ್ಯೆಯೇ ಅಲ್ಲ—ಉದ್ದಾಲಕ! ಇದಕ್ಕೇಕಿಷ್ಟು ಚಿಂತೆ? "ಮಾಡಬೇಕು" ಎಂಬುದನ್ನು ಮಾಡಲೊಲ್ಲಳಾದರೆ, "ಮಾಡಬಾರದು" ಎಂಬುದನ್ನು ಮಾಡಿಯೇ ಮಾಡುವಳು ಎಂದರ್ಥ. ನಿನ್ನ ಮನಸ್ಸಿಗೆ ಬೇಕಾದುದಕ್ಕೆ ವಿಪರೀತವಾಗಿ ನೀನು ವಿರೋಧವನ್ನೇ ಆಕೆಯೊಡನೆ ಹೇಳುತ್ತಿರು. ಆಗ ಅವಳು ಮಾಡುವ ಪ್ರತಿಕೂಲ ಕಾರ್ಯವು ನಿನಗೆ ಅನುಕೂಲವಾಗಿಯೇ ಪರಿಣಮಿಸುವುದಲ್ಲವೆ?

ಉದ್ದಾಲಕ: (ಅಹುದೆಂದು ಬೆಳಕು ಕಂಡು, ಸಂತೋಷದಿಂದ) ಆಹಾ! ಎಂತಹ ಉಪಾಯವಿದು! ಪೂಜ್ಯರೇ, ನೀವು ನನ್ನ ಭಾಗ್ಯದ ಗುರುಗಳೇ ಸರಿ! ಬಹಳ ಚೆನ್ನಾದ ಉಪಾಯವನ್ನೇ ಹೇಳಿದಿರಿ. ಇಷ್ಟು ಕಾಲವೂ ನನಗಿದು ಹೊಳೆಯಲಿಲ್ಲವಲ್ಲ!

ಕೌಂಡಿನ್ಯ: (ಎದ್ದು ನಿಂತು) ವಿಪ್ರಶ್ರೇಷ್ಠ! ನೀನು ಸರಲ ಸ್ವಭಾವದವನು. ಆದ್ದರಿಂದ ನಿನಗೆ ಅದು ಹೊಳೆಯಲಿಲ್ಲ. ಇನ್ನು ನಿನ್ನ ಸಂಸಾರವು ಸಾರಮಯವಾಗಿ ಸಾಗಲಿ....ನಾನಿನ್ನು ಹೊರಡುತ್ತೇನೆ.

ಉದ್ದಾಲಕ: ಪೂಜ್ಯರೇ, ತಾವು ನಮ್ಮ ಆತಿಥ್ಯವನ್ನು ಸ್ವೀಕರಿಸಲು ಒಂದೆರಡು ದಿನ ಇಲ್ಲಿ ಉಳಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ.

ಕೌಂಡಿನ್ಯ: ಇಲ್ಲ. ಉದ್ದಾಲಕ! ನಾನು ಇನ್ನೂ ಅನೇಕ ಆಶ್ರಮಗಳನ್ನು ಸಂದರ್ಶಿಸಿಕೊಂಡು ತೀರ್ಥಯಾತ್ರೆಗೆ ಹೋಗಬೇಕಾಗಿದೆ. ಆದುದರಿಂದ ಇನ್ನು ನಾನು ನನ್ನ ಮುಂದಿನ ಪಥವನ್ನು ಕುರಿತು ಮುಂದುವರಿಯುತ್ತೇನೆ. ನಿನ್ನ ಆತಿಥ್ಯವನ್ನು ಈ ಬಾರಿ ಸ್ವೀಕರಿಸಲು ಅಸಮರ್ಥನಾದುದಕ್ಕೆ ಕ್ಷಮಿಸಬೇಕು.

ಉದ್ದಾಲಕ: ಪೂಜ್ಯರೇ, ನಿಮ್ಮನ್ನು ಕ್ಷಮಿಸುವ ನಾನು ಎಷ್ಟರವನು? ನಿಮ್ಮಿಂದ ನಾನು ಧನ್ಯನಾದೆನು. (ತೆರೆ.)

## ದೃಶ್ಯ ೩

[ಉದ್ದಾಲಕನ ಮನೆಜಗುಲಿ. ಉದ್ದಾಲಕನು ಕುಳಿತಿರುವನು.]

ಉದ್ದಾಲಕ: ಚಂಡೀ, ನನಗೆ ತುಂಬಾ ಕೆಲಸವಿದೆ. ಇತ್ತ ಕಡೆ ಬಂದು ಹಾಳುಹರಟೆ ಕೊಚ್ಚಬೇಡ.

ಚಂಡಿ: (ಪ್ರವೇಶಿಸಿ) ನನಗೆ ನಿಮ್ಮಲ್ಲಿ ತುಂಬಾ ಮಾತಾಡಲಿಕ್ಕಿದೆ. ನಾನು ಇಲ್ಲೇ ಇರುವೆನು.

ಉದ್ದಾಲಕ: (ಆತ್ಮಗತ) ಕೌಂಡಿನ್ಯರು ಹೇಳಿದ ಉಪಾಯವು ಬಹಳ ಒಳ್ಳೆಯದಿದೆ. (ಪ್ರಕಾಶ) ಚಂಡೀ, ನೋಡು, ನಾಳೆಯ ದಿನ ಪಿತೃಶ್ರಾದ್ಧ ಆಗಬೇಕು. ಆದರೆ. ನಾನು ಬೇರೆ ಹಲವಾರು ಕೆಲಸವಿರುವುದರಿಂದ ಆ ಶ್ರಾದ್ಧವನ್ನು ನಾಡಿದೇ ಮಾಡುವೆ ಅಥವಾ ಮಾಡುವುದಿಲ್ಲ.

ಚಂಡಿ: ಅದಾಗದು. ಅದು ನಾಳೆಯೇ ಆಗಬೇಕು. ನಾನು ನಾಳೆಯೇ ನಿಮ್ಮಿಂದ ನಿಮ್ಮ ಪಿತೃಶ್ರಾದ್ಧವನ್ನು ಮಾಡಿಸಿಯೇ ಮಾಡಿಸುವೆನು.

ಉದ್ದಾಲಕ: (ಸ್ವಗತ) ಆಹಾ! ಎಷ್ಟು ಆನಂದ! (ಪ್ರಕಾಶ) ಪರಿಶುದ್ಧವಾದ ವಸ್ತುಗಳನ್ನು ನಾನು ತರುವುದೇ ಇಲ್ಲ. ಕೇವಲ ಅಧಮತರದ ಶಾಲಿ, ವ್ರೀಹಿ, ಧಾನ್ಯಗಳನ್ನು ಕದ್ದೇತಂದು ತೀರಾ ಅಯೋಗ್ಯರಾದ ಬ್ರಾಹ್ಮಣರನ್ನು ಕರೆದು, ಪೈತೃಕವನ್ನು ಮಾಡಿಸುವೆನು.

ಚಂಡಿ: ಅದಕ್ಕೆ ನಾನು ಒಪ್ಪಬೇಡವೇ? ಬಹಳ ಉತ್ತಮ ತರದ ಶಾಲಿ, ವ್ರೀಹಿ ಧಾನ್ಯಗಳನ್ನು ಬೇಡಿಯೇ ತಂದು ಮನೆಯನ್ನು ಗುಡಿಸಿ ಶುದ್ಧಗೊಳಿಸಿ ಇಂದು ರಾತ್ರಿಯೇ ವಿಶಾಲಗುಣಸಂಪನ್ನರೂ ವೇದಪಾರಂಗತರೂ ಸುಶೀಲರೂ ಎನಿಸಿರುವ ಬ್ರಾಹ್ಮಣರಿಗೆ ಹೇಳಿಬಂದು, ನಾಳೆಯ ದಿನವೇ ತಪ್ಪದೆ ಖಂಡಿತವಾಗಿ ನಿಮ್ಮಿಂದಲೇ ನಿಮ್ಮ ಪಿತೃಶ್ರಾದ್ಧವನ್ನು ಮಾಡಿಸಿಯೇ ಬಿಡುವೆನು. ನೋಡಿ, ಚೆನ್ನಾಗಿ ಕೇಳಿರಿ, ಸರಿಯಾಗಿ ತಿಳಿದುಕೊಳ್ಳಿರಿ— ಮಾಡಿಸಿಯೇ ಮಾಡಿಸುವೆನು.

ಉದ್ದಾಲಕ: (ಸ್ವಗತ) ಭಗವಂತ! ಎಂಥ ಉಲ್ಲಾಸವಿದು! ಏನು ಭಾಗ್ಯವಿದು! (ಪ್ರಕಾಶ) ಆಹಾಹಾ! ನಿನ್ನ ಸಾಮರ್ಥ್ಯವೇ? ಹಾಗಿದ್ದರೆ ನಾನು ಕುತುಪಕಾಲದಲ್ಲಿ (ದಿನದ ಎಂಟನೆಯ ಮುಹೂರ್ತ) ಶ್ರಾದ್ಧವನ್ನು ಮಾಡಬಿದ್ದರಾಯಿತಲ್ಲ!

ಚಂಡಿ: ಕುತುಪಕಾಲಕ್ಕೆ ಸರಿಯಾಗಿ ಶ್ರಾದ್ಧೋಪಕರಣಗಳನ್ನು ತಯಾರಿಸಿ, ನಿಮ್ಮಿಂದಲೇ ಯೋಗ್ಯ ಕಾಲದಲ್ಲಿ ಶ್ರಾದ್ಧ ಮಾಡಿಸದಿದ್ದಲ್ಲಿ ನಾನು ಚಂಡಿಯೇ ಅಲ್ಲ—ನೋಡೋಣ.

ಉದ್ದಾಲಕ: ಬೇಡ ಚಂಡೀ, ನನಗೆ ನಾಳೆ ಸಮಯ ಇಲ್ಲ. ಸುಮ್ಮನೆ ಏತಕ್ಕೆ ಒತ್ತಾಯಪಡಿಸುವೆ? ನೋಡು, ಬಂದ ವಿಪ್ರರಿಗೆ ಅರ್ಚಿಸಬೇಕು.

ಹಾಲು, ಮೊಸರು, ತುಪ್ಪ, ಸಕ್ಕರೆ, ಅನ್ನ-ಪರಮಾನ್ನ, ಹಣ್ಣು ಉಣಬಡಿಸ ಬೇಕು. ಇದೆಲ್ಲಾ ನನ್ನಿಂದಾಗದು. ಬರಿದೆ ಏತಕ್ಕೆ ನಿರ್ಬಂಧಪಡಿಸುವೆ? ಸಾಕು, ಸುಮ್ಮನಿರು!

ಚಂಡಿ: ನೀವೇ ಸುಮ್ಮನಿರಿ! ನಾಳೆಯೇ ಆಗಬೇಕು.

ಉದ್ದಾಲಕ: ನೀನು ಈ ರೀತಿ ನಿರ್ಬಂಧಮಾಡಿದರೆ ನಾನು ಏನೂಂತ ಮಾಡ್ಬೇಕು? ಮೇಲೆ ಹೇಳಿದುದೆಲ್ಲವನ್ನೂ ನಾಳೆ ಒದಗಿಸಲು ನನ್ನಿಂದ ಸಾಧ್ಯವೇ ಇಲ್ಲ. ಅಲ್ಲದೆ, ಬಂದ ವಿಪ್ರರನ್ನು ಸನ್ಮಾನಿಸಿ ವಸ್ತ್ರ, ದಕ್ಷಿಣೆ ಎಲ್ಲಾ ಇತ್ತು ಸತ್ಕರಿಸಲು ನನಗೆ ಸಮಯವಿಲ್ಲ. ಆ ಕೆಲಸ ನನ್ನಿಂದಾಗದೇ ಆಗದು.

ಚಂಡಿ: ಬ್ರಾಹ್ಮಣರನ್ನು ನಿಮ್ಮಿಂದಲೇ ಅರ್ಚಿಸುವಂತೆ ಮಾಡಿ ಮೃಷ್ಟಾನ್ನ ಭೋಜನದಿಂದ ಅವರನ್ನು ತೃಪ್ತಿಪಡಿಸಿ ವಸ್ತ್ರದಕ್ಷಿಣೆಗಳನ್ನು ನಿಮ್ಮಿಂದಲೇ ಕೊಡಿಸುವೆನು! ಇದು ನಿಶ್ಚಯ, ಇದು ನಿಶ್ಚಯ!

ಉದ್ದಾಲಕ: ಅಯ್ಯೋ ಚಂಡಿಯೇ, ನಿನ್ನ ಪ್ರತಿಕೂಲತನಕ್ಕೆ ಏನೆಂದು ಹೇಳಲಿ? ನನಗೆ ನಾಳೆ ತುಂಬಾ ಕೆಲಸ ಎಂದೆ.

ಚಂಡಿ: ಹೇಗೂ ಆಗಲಿ. ನಾಳೆ ನಿಮ್ಮ ಪಿತೃಶ್ರಾದ್ಧ ನಡೆಯಬೇಕು, ನಡೆಯಲೇ ಬೇಕು, ನಡೆಯಲೇ ಬೇಕು! (ತೆರೆ.)

## ದೃಶ್ಯ ೪

[ಉದ್ದಾಲಕನ ಮನೆಯ ಇನ್ನೊಂದು ಕೊಠಡಿ. ಉದ್ದಾಲಕನು ಒಂದು ಆಸನದಲ್ಲಿ ಕುಳಿತಿರುವನು.)

ಉದ್ದಾಲಕ: ಇತ್ತೀಚೆಗೆ ನನ್ನ ಜೀವನದಲ್ಲಿ ನವ್ಯವಾದೊಂದು ಚೈತನ್ಯವು ತೋರುತ್ತಿರುವುದು. ಆ ಕೌಂಡಿನ್ಯ ಮುನಿವರ್ಯರ ಉಪದೇಶದಿಂದ ನಾನು ಪುನೀತನಾದೆನು. ಆಹಾ! ಮನೆಯೆಲ್ಲಾ ಇಂದು ಬಹಳ ಸ್ವಚ್ಛವಾಗಿದೆ! ಗಂಧ ಧೂಪವು ಮನೆಯಿಡೀ ಪರಿಮಳವನ್ನು ಸೂಸುತ್ತಿವೆ. ಪ್ರತಿಯೊಂದು ವಸ್ತುಗಳೂ ಎಷ್ಟೊಂದು ಅಚ್ಚುಕಟ್ಟಾಗಿ ಇರಿಸಲ್ಪಟ್ಟಿದೆ! ಆಹಾ ಚಂಡಿಯೇ! ನೀನು ಪ್ರತಿಕೂಲೆಯಾದರೂ ನಿನ್ನನ್ನು ಅನುಕೂಲ ಸ್ಥಿತಿಗೆ ಅಳವಡಿಸಿಕೊಳ್ಳಲು ನನಗೆ ಅನುಕೂಲವಾಗಿ ಮಂತ್ರಾಲೋಚನೆಯನ್ನು ಹೇಳಿದ ಆ ಕೌಂಡಿನ್ಯರು ಮಹಾಜ್ಞಾನಿಗಳು! ಅವರಿಂದ ಪುನೀತ

ಸಾದೆನು. (ಆಲೋಚಿಸಿ) ಏನು, ವಿಪ್ರರು ಬರಲಿಲ್ಲವಲ್ಲಾ! (ಕಿವಿಗೊಟ್ಟು) ಓಹೋ, ಆದಾರೋ ಇತ್ತ ಕಡೆಗೇ ಬರುವಂತಿದೆ.

(ಇಬ್ಬರು ಬ್ರಾಹ್ಮಣರ ಪ್ರವೇಶ.)

ಉದ್ದಾಲಕ: (ಎದ್ದು) ಪೂಜ್ಯರಿಗೆ ವಂದಿಸುವೆನು.

ಬ್ರಾಹ್ಮಣರಿಬ್ಬರೂ: ಕಲ್ಯಾಣಮಸ್ತು.

ಉದ್ದಾಲಕ: ಬನ್ನಿರಿ. ಈ ಪೀಠವನ್ನು ಅಲಂಕರಿಸಿರಿ. (ಕುಳಿತು ಕೊಂಡ ಮೇಲೆ) ಶ್ರಾದ್ಧಕ್ಕೆ ಸರಿಯಾದ ಕಾಲ ಆಯಿತೇ?

ಬ್ರಾಹ್ಮಣ ೧: ಇನ್ನೇನು? ಒಂದು-ಒಂದೂವರೆ ಘಳಿಗೆ ಇರಬಹುದು.

ಬ್ರಾಹ್ಮಣ ೨: ಅಡಿಗೆ ಎಲ್ಲಾ ಆಗುವಾಗ ಸರಿಹೋಗುತ್ತದೆ.

ಉದ್ದಾಲಕ: ಅಡಿಗೆ ತಯಾರಾಗುತ್ತಿದೆ. ಇನ್ನು ಕೆಲವೇ ಕ್ಷಣಗಳಲ್ಲಿ ಸಿದ್ಧವಾಗಬಹುದು.

ಚಂಡಿ: (ಪ್ರವೇಶಿಸಿ) ಸ್ನಾನಕ್ಕೆ ಹೋಗೀಂದ್ರೆ.

ಉದ್ದಾಲಕ: ಭಟ್ಟರೇ, ನೀವೂ ಸ್ನಾನಕ್ಕೆ ಹೋಗಬಹುದು. ಎಲ್ಲ ಸನ್ನಾಹಗಳೂ ಆಗಿವೆ. (ಪರದೆ ಇಳಿಯುವುದು).

[ಒಳಗಿನಿಂದ ಮಂತ್ರಘೋಷಣೆ ಕೇಳಿಬರುತ್ತದೆ. ಕೊನೆಗೆ ಪರದೆ ಮೇಲೇರುತ್ತದೆ. ಒಂದು ದೀಪ ಹೊತ್ತಿಸಿಟ್ಟಿರುತ್ತದೆ. ಉದ್ದಾಲಕನು ಒಂದು ಬಾಳೆಲೆಯಲ್ಲಿ ಶ್ರಾದ್ಧಾಂಗವಾದ ಪಿಂಡವನ್ನು ತೆಗೆದು]

ಉದ್ದಾಲಕ: ಚಂಡೀ, ಲೇ ಚಂಡೀ, (ಚಂಡಿ ಬರುವಳು) ಇದು ಶ್ರಾದ್ಧಾಂಗವಾದ ಪಿಂಡವು. ಇದನ್ನು ಕೊಂಡುಹೋಗಿ ಜಾಗ್ರತೆಯಾಗಿ ನೀರಿನಲ್ಲಿ ಹಾಕಿ ಬಾ!

[ಚಂಡಿಯು ಉದ್ದಂಡದಿಂದ ಎತ್ತಿ "ನೀರಿನಲ್ಲಿ ಹಾಕಲೇಕೆ? ಇಲ್ಲ, ಖಂಡಿತವಾಗಿ ಇಲ್ಲ!" ಎನ್ನುತ್ತ, ಅಲ್ಲಿಂದಲೇ ಬೀದಿಗೆ ಬಿಸಾಡುವಳು. ಆಗ ಉದ್ದಾಲಕನು ಕೋಪಭೀಕರನಾಗಿ]

ಉದ್ದಾಲಕ: ಎಲೌ ದ್ರೋಹಿಯಾದ ಚಂಡಿಯೇ! ಪರಮಪಾವನವೂ ಪರಮಪೂಜ್ಯವೂ ಆದ ಶ್ರಾದ್ಧಾಂಗ ಪಿಂಡವನ್ನು ನೀರಿನಲ್ಲಿ ಹಾಕೆಂದು ಕೊಟ್ಟರೆ, ಉದ್ದಂಡದಿಂದೆತ್ತಿ ಬೀದಿಗೆ ಒಗೆದೆಯಾ? ನೀಚಳೇ! (ಇಬ್ಬರೂ ಭಟ್ಟರು, "ಏನಿದು ವಿಪರೀತ, ಏನಿದು ವಿಪರೀತ!" ಎನ್ನುತ್ತಾ ಪ್ರವೇಶ) ನಿನ್ನ ಚಂಡಿತನವು ಮೇರೆ ಮೀರಿತು. ನನ್ನ ಪಿತೃಶ್ರಾದ್ಧವನ್ನು ಕೆಡಿಸಿದ

[ಹೊದಿಕೆಯ ೨ನೇ ಪುಟಕ್ಕೆ ಮುಂದುವರಿದಿದೆ]

Edited, Printed & Published by K. V. Shenoy
at The Prabhat Printers, Ltd., Mangalore.